# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಬಿ.ಜಿ ಪಾಟೀಲ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 666

ಉತ್ತರಿಸಬೇಕಾದ ದಿನಾಂಕ : 22-02-2022

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳ ಗ್ರಾಮೀಣ ಭಾಗದಲ್ಲಿ ಹೈನುಗಾರಿಕೆಯಲ್ಲಿ ತೊಡಗಬಯಸುವ ನಿರುದ್ಯೋಗಿಗಳಿಗೆ ಶೂನ್ಯ ಬಡ್ಡಿ ದರದಲ್ಲಿ ಸಾಲ ನೀಡುವ ಸರ್ಕಾರದ ಯೋಜನೆ ಯಾವ ಹಂತದಲ್ಲಿದೆ; (ಸಂಪೂರ್ಣ ವಿವರ ನೀಡುವುದು) | ರಾಜ್ಯದಲ್ಲಿ ಹೈನುಗಾರಿಕೆಗೆ ದುಡಿಯುವ ಬಂಡವಾಳಕ್ಕಾಗಿ ರೂ.2.00 ಲಕ್ಷಗಳವರೆಗಿನ ಸಾಲವನ್ನು ನಿವ್ವಳ ಶೂನ್ಯ ಬಡ್ಡಿ ದರದಲ್ಲಿ ನೀಡುವ ಯೋಜನೆ 2020-21 ರಿಂದ ಚಾಲನೆಯಲ್ಲಿರುತ್ತದೆ.<br><br>ಹೈನುಗಾರಿಕೆಗೆ, ಹಸು ಕೊಳ್ಳಲು ಮತ್ತು ಮೂಲಭೂತ ಸೌಕರ್ಯ ನಿರ್ಮಿಸಲು ರೂ.10.00 ಲಕ್ಷಗಳ ವರೆಗಿನ ಸಾಲವನ್ನೂ ಶೇ.3 ರ ಬಡ್ಡಿ ದರದಲ್ಲಿ ನೀಡುವ ಯೋಜನೆ 2008-09 ರಿಂದ ಚಾಲನೆಯಲ್ಲಿರುತ್ತದೆ.<br><br>ಕಲಬುರಗಿ ಮತ್ತು ಯಾದಗಿರಿ ಜಿಲ್ಲಾ ಕೇಂದ್ರ ಬ್ಯಾಂಕಿನಲ್ಲಿ 2011 ರಿಂದ 2017 ರ ವರೆಗೆ ಹೈನುಗಾರಿಕೆ ಸಾಲ ವಿತರಿಸಿ ರೂ.554.31 ಲಕ್ಷ ಸುಸ್ತಿ ಬಾಕಿ ಇದ್ದು, ಬ್ಯಾಂಕಿನ ವಸೂಲಾತಿ ಕುಂಟಿತವಾಗಿದ್ದರಿಂದ 2018 ರಿಂದ ಇದುವರೆಗೆ ಯಾವುದೇ ಸಾಲ ನೀಡಿರುವುದಿಲ್ಲ.<br><br>ಡಿಸಿಸಿ ಬ್ಯಾಂಕಿನಿಂದ ರೈತರಿಗೆ 2022-23 ನೇ ಸಾಲಿನಲ್ಲಿ ಸಾಲ ವಿತರಿಸಲು ಕ್ರಮವಿಡಲಾಗುವುದು. |
| ಆ) | ಸದರಿ ಯೋಜನೆಯಡಿ ಫಲಾನುಭವಿಗಳು ಹೊಂದಿರಬೇಕಾದ ಮಾನದಂಡಗಳೇನು; (ವಿವರ ನೀಡುವುದು) | ಸದರಿ ಯೋಜನೆಯಡಿ ಫಲಾನುಭವಿಗಳು ಹೊಂದಿರಬೇಕಾದ ಮಾನದಂಡಗಳು:<br>**1) ಶೂನ್ಯ ಬಡ್ಡಿ ದರದಲ್ಲಿ ದುಡಿಯುವ ಬಂಡವಾಳ ಸಾಲ:-**<br>1. ಫಲಾನುಭವಿಗಳು ಹಾಲು ಉತ್ಪಾದಕ ಸಹಕಾರ ಸಂಘಗಳಲ್ಲಿ ಹಾಲು ಪೂರೈಸುತ್ತಿರಬೇಕು.<br>2. ಸದಸ್ಯರು ಈ ಸಂಘಗಳ ಮೂಲಕ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ/ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಅರ್ಜಿ ಸಲ್ಲಿಸಬೇಕು.<br>**2) ಹೈನುಗಾರಿಕೆ ಕೈಗೊಳ್ಳಲು ಶೇ.3 ರ ಬಡ್ಡಿ ದರದಲ್ಲಿ ಮಧ್ಯಮಾವದಿ ಮತ್ತು ದೀರ್ಘಾವಧಿ ಕೃಷಿ ಸಾಲ:-**<br>1. ಫಲಾನುಭವಿಗಳು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು/ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಲ್ಲಿ ಸದಸ್ಯರಾಗಿರತಕ್ಕದ್ದು. |

| | | |
|---|---|---|
| | | 2. ಹೈನುಗಾರಿಕೆ ಮೇವು ಬೆಳೆಯಲು ಭೂಮಿ ಹೊಂದಿರಬೇಕು.<br>3. ಇತರೇ ಯಾವುದೇ ಬ್ಯಾಂಕುಗಳಲ್ಲಿ ಈ ಹೈನುಗಾರಿಕೆ ಉದ್ದೇಶಕ್ಕೆ ಸಾಲ ಪಡೆದಿರಬಾರದು. |
| ಇ) | ಮೇಲ್ಕಂಡ ಜಿಲ್ಲೆಗಳಲ್ಲಿ ಸದರಿ ಯೋಜನೆಯ ಫಲಾನುಭವಿಗಳ ಸಂಖ್ಯೆ ಹಾಗೂ ನೀಡಲಾದ ಮೊತ್ತವೆಷ್ಟು? (ವಿವರ ನೀಡುವುದು) | ಮೇಲ್ಕಂಡ ಜಿಲ್ಲೆಗಳಲ್ಲಿ ಸದರಿ ಯೋಜನೆಯ 2011 ರಿಂದ 2017 ರವರೆಗೆ ರೂ.10.00 ಲಕ್ಷದವರೆಗೆ ಶೇ.3 ರ ಬಡ್ಡಿ ದರದಲ್ಲಿ ವಿತರಿಸಿದ ಸಾಲ ದಿ:31-01-2022 ಅಂತ್ಯಕ್ಕೆ ಸುಸ್ತಿಯಾಗಿದ್ದು, ಸದಸ್ಯರ ಸಂಖ್ಯೆ ಹಾಗೂ ಸಾಲದ ಹೊರಬಾಕಿ ಮೊತ್ತ ಈ ಕೆಳಗಿನಂತಿದೆ.<br>(ರೂ.ಲಕ್ಷಗಳಲ್ಲಿ) |

| ಕ್ರಸಂ | ಜಿಲ್ಲೆಯ ಹೆಸರು | ಸಂಖ್ಯೆ | ಮೊತ್ತ (ದಿ:31.01.2022ಕ್ಕೆ ಇದ್ದಂತೆ ) |
|---|---|---|---|
| 1 | ಕಲಬುರಗಿ | 584 | 539.18 |
| 2 | ಯಾದಗಿರ | 19 | 15.13 |
| | ಒಟ್ಟು | 603 | 554.31 |

**ಸಂಖ್ಯೆ ಸಿಒ 31 ಸಿಸಿಬಿ 2022**

(ಎಸ್. ಟಿ. ಸೋಮಶೇಖರ್)

ಸಹಕಾರ ಸಚಿವರು